# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2526 |
| ಸದಸ್ಯರ ಹೆಸರು | : | ಶ್ರೀಅಲ್ಲಂ ವೀರಭದ್ರಪ್ಪ, (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 23-03-2022 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಪ್ರ ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಬಳ್ಳಾರಿ ತಾಲ್ಲೂಕಿನ ಗಡಿ ಭಾಗದಲ್ಲಿರುವ ಗಾದಿಲಿಂಗೇಶ್ವರ ಪುಣ್ಯಕ್ಷೇತ್ರಕ್ಕೆ ಗಡಿ ಭಾಗದಿಂದ ಮೇಲ್ಸೇತುವೆ ನಿರ್ಮಾಣ ಮಾಡುವುದರಿಂದ ಕರ್ನಾಟಕ ಭಕ್ತಾಧಿಗಳಿಗೆ ಅನುಕೂಲವಾಗಲಿರುವುದು ಸರ್ಕಾರದ ಗಮನಕ್ಕೆ ಬಂದಿದೇಯೇ; | ಬಳ್ಳಾರಿ ತಾಲೂಕಿನಲ್ಲಿ ರಾಜ್ಯದ ಗಡಿ ಭಾಗದಲ್ಲಿರುವ ಬಸರಕೋಡು ಗ್ರಾಮವಿದ್ದು, ಸದರಿ ಗ್ರಾಮಕ್ಕೆ ಹೊಂದಿಕೊಂಡು ವೇದವತಿ (ಹಗರಿ) ನದಿಯು ಹರಿಯುತ್ತಿದೆ. ನದಿಯ ಮತ್ತೊಂದು ತೀರದಲ್ಲಿ ಆಂಧ್ರಪ್ರದೇಶ ರಾಜ್ಯದ ಆಲೂರು ತಾಲೂಕಿನ ವ್ಯಾಪ್ತಿಯಲ್ಲಿ ಗೂಳ್ಯಂ ಪುಣ್ಯಕ್ಷೇತ್ರವಿರುತ್ತದೆ (ಶ್ರೀ ಗಾದಿಲಿಂಗೇಶ್ವರ ದೇವಸ್ಥಾನ) ಬಸರಕೋಡು ಹಾಗೂ ಸುತಮುತ್ತಲಿನ ಸುಮಾರು 20 ಗ್ರಾಮಗಳಲ್ಲಿನ ಭಕ್ತಾದಿಗಳು ಗಾದಿಲಿಂಗೇಶ್ವರ ದೇವಸ್ಥಾನಕ್ಕೆ ಭೇಟಿ ನೀಡಬೇಕಾದಲ್ಲಿ ಮೋಕಾ-ಎರ್ರಗುಡಿ-ಸಿಂಧುವಾಳಂ ಮುಖಾಂತರ ಸುಮಾರು 28 ಕಿ.ಮೀ. ಬಳಸಾದ (Circuitous) ಮಾರ್ಗದಲ್ಲಿ ಕ್ರಮಿಸಬೇಕಾಗಿರುತ್ತದೆ. ಆದರೆ ಪ್ರಸ್ತುತ ಮೇಲ್ಸೇತುವೆ ನಿರ್ಮಾಣ ಸಂಬಂಧ ಪ್ರಸ್ತಾವನೆ ಇರುವುದಿಲ್ಲ. |
| ಆ) | ಬಂದಿದ್ದಲ್ಲಿ, ಸುಮಾರು ಎರಡೂವರೆ ಕಿ.ಮೀ ಉದ್ದದ ಮೇಲ್ಸೇತುವೆ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದೇ; | |
| ಇ) | ಈ ಸೇತುವೆ ನಿರ್ಮಾಣದಿಂದ ಕರ್ನಾಟಕದ ಈ ಪುಣ್ಯಕ್ಷೇತ್ರಕ್ಕೆ ಒಂದು ದೊಡ್ಡ ಸಮುದಾಯವು ಭೇಟಿ ನೀಡಲು ಅನುಕೂಲವಾಗಲಿದ್ದು, ಮೇಲ್ಸೇತುವೆ ನಿರ್ಮಾಣ ಸಂಬಂಧ ಆಂಧ್ರಪ್ರದೇಶ ಮತ್ತು ಕೇಂದ್ರ ಸರ್ಕಾರದೊಂದಿಗೆ ಚರ್ಚಿಸಿ ಮುಂದುವರೆಯುವುದೇ? | |

ಕಡತ ಸಂಖ್ಯೆ: ಲೋಇ 57 ಸಿಐಎಸ್ 2022(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು